# ತರಗತಿಯ ಹೊರಗೆ ಇತಿಹಾಸ: ವಿದ್ಯಾರ್ಥಿಯೊಬ್ಬನ ಅನುಭವ

ನಂದನ್ ಕೌಶಿಕ್

ಕಲಿಯುವಿಕೆ ಎಂದರೆ ಹೊಸ ಜ್ಞಾನವನ್ನು ಪಡೆದುಕೊಳ್ಳುವುದು. ಕೆಲವೊಮ್ಮೆ ನಾವು ಏನು ಕಲಿಯಬೇಕು ಎಂಬುದನ್ನು ತಿಳಿಸಲಾಗುತ್ತದೆ. ಇನ್ನು ಕೆಲವೊಮ್ಮೆ ಅದನ್ನು ನಮ್ಮ ಇಚ್ಚೆಗೆ ಬಿಡಲಾಗುತ್ತದೆ ಇಲ್ಲವೆ ನಾವೇ ನಮ್ಮ ಆಸಕ್ತಿಯ ಯಾವುದಾದರೊಂದು ಕ್ಷೇತ್ರಕ್ಕೆ ಹೋಗಿ ಅದನ್ನು ಆರಿಸಿಕೊಳ್ಳುತ್ತೇವೆ. ತರಗತಿಯು ನಾವು ವಾಸಿಸುವ ಈ ಜಗತ್ತಿನಲ್ಲಿ ಔಪಚಾರಿಕ ಶಿಕ್ಷಣ ಪಡೆಯುವ ತಾಣವಾಗಿದೆ, ವಿದ್ಯಾರ್ಥಿಗಳಿಗೆ ಅವರು ಈ ಪ್ರಪಂಚಕ್ಕೆ ಕಾಲಿಡುವ ಮೊದಲು ಇಲ್ಲಿ ಏನೇನು ನಡೆದಿದೆ ಎಂಬುದನ್ನು ತಿಳಿಸಿ ಸುತ್ತಲಿನ ಪ್ರಪಂಚಕ್ಕೆ ಅವರನ್ನು ಸಿದ್ಧಪಡಿಸಲಾಗುತ್ತದೆ, ಇದರಿಂದಾಗಿ ಅವರು ಹೊರಗೆ ಹೋಗಿ ಭವಿಷ್ಯವನ್ನು ಎದುರಿಸಬಹುದು.

ಆದಾಗ್ಯೂ, ಇದು ಇನ್ನೂ ಈ ಜಗತ್ತನ್ನು ಕುರಿತಂತೆ ಸಮಗ್ರ ನೋಟವನ್ನು ಒದಗಿಸುವುದಿಲ್ಲ. ಕಲಿಕೆಯಲ್ಲಿ ಪ್ರಾಯೋಗಿಕ ಕಲಿಕೆಗಿಂತ ಸಿದ್ಧಾಂತವು ಆದ್ಯತೆಯನ್ನು ಪಡೆಯುತ್ತದೆ. ಕೆಲವೊಮ್ಮೆ, ವಾಸ್ತವದಲ್ಲಿ ಕಲಿಕೆ, ಮತ್ತು ಕಲಿಕೆಯ ಬಹಳಷ್ಟು ಅಂಶಗಳು ತರಗತಿಯ ಹೊರಗೆ ನಡೆಯುತ್ತವೆ. ತರಗತಿಯ ಹೊರಗಿನ ಪ್ರದೇಶವು ಇಡೀ ಜಗತ್ತನ್ನು ಒಳಗೊಂಡಿದೆ ಮತ್ತು ನಮ್ಮ ಶಾಲಾ ಶಿಕ್ಷಣದ ಮೂಲಕ ನಾವು ಇಲ್ಲಿಗೆ ಪ್ರವೇಶಿಸಲು ತಯಾರಿ ನಡೆಸುತ್ತೇವೆ. ಆದ್ದರಿಂದ ಹೊರಗೆ ತಳ್ಳಲ್ಪಡುವ ಮೊದಲು ಅದು ಹೇಗಿದೆ ಎಂದು ಅದರ ಅನುಭವವನ್ನು ಪಡೆಯುವುದು ಖಂಡಿತವಾಗಿಯೂ ನಮ್ಮನ್ನು ಉತ್ತಮವಾಗಿ ಸಜ್ಜುಗೊಳಿಸುತ್ತದೆ. ತರಗತಿಯ ಹೊರಗಿನ ಕಲಿಕೆಯ ನನ್ನ ಅನುಭವಗಳು ಇಲ್ಲಿವೆ.

ನನ್ನ ಆಸಕ್ತಿಯ ವಿಷಯ ಇತಿಹಾಸ. ನಾನು ಇತಿಹಾಸ ಮತ್ತು ಕಲಾಕೃತಿಗಳು, ಪಾರಂಪರಿಕ ಕಟ್ಟಡಗಳು, ಅವಶೇಷಗಳು, ದಾಖಲೆಗಳು ಮತ್ತು ಪುರಾತನ ವಸ್ತುಗಳೊಂದಿಗೆ ಆಕರ್ಷಣೆಯನ್ನು ಹೊಂದಿದ್ದೇನೆ ... ಬಹುಶಃ ಅದರಲ್ಲಿ ನನ್ನ ಆಸಕ್ತಿ ಇವತ್ತು ನಿನ್ನೆಯದಲ್ಲ! ಸಾಮಾನ್ಯವಾಗಿ ಚರಿತ್ರೆ ಅಥವಾ ಹಿಂದಿನದು ಎಲ್ಲರಿಗೂ ಇಷ್ಟವಾಗುವುದಿಲ್ಲ. ಇತಿಹಾಸವನ್ನು ತರಗತಿಯೊಳಗೆ ಕಲಿಸಲು ಅನುಸರಿಸುವ ವಿಧಾನದಿಂದಾಗಿ ಕೆಲವರು ಇದನ್ನು ತಿರಸ್ಕರಿಸುತ್ತಾರೆ ಎಂಬುದನ್ನೂ ನಾನು ಇಲ್ಲಿ ಹೇಳಬಯಸುತ್ತೇನೆ. ಕೆಲವು ಅದ್ಭುತ ಇತಿಹಾಸ ಶಿಕ್ಷಕರಿದ್ದಾರೆ, ಪಠ್ಯದ ವಿಷಯಕ್ಕೆ ಜೀವ ತುಂಬಲು, ನಕ್ಷೆಗಳನ್ನು ಬಿಡಿಸಲು ಮತ್ತು ಆಕರ್ಷಕ ವಿವರಣೆಯನ್ನು ನೀಡಲು ಸಮರ್ಥರಾಗಿದ್ದಾರೆ, ಆದರೆ ನಾನು ಭೇಟಿಯಾದ ಹೆಚ್ಚಿನ ಜನರು ಭಯಾನಕ ಇತಿಹಾಸ ಶಿಕ್ಷಕರನ್ನು ಹೊಂದಿದ್ದು, ಆ ಶಿಕ್ಷಕರು ವಿದ್ಯಾರ್ಥಿಗಳಿಗೆ ಆ ವಿಷಯದಲ್ಲಿರುವ ಆಸಕ್ತಿಯನ್ನು ಶಾಶ್ವತವಾಗಿ ಕಳೆದುಕೊಳ್ಳುವಂತೆ ಮಾಡಿದರು ಎಂಬುದು ದುರದೃಷ್ಟಕರ ಸಂಗತಿಯಾಗಿದೆ. ನಾವು ಶಾಲೆಯಲ್ಲಿ ಕಲಿಯುತ್ತಿದ್ದಾಗ ಇತಿಹಾಸ ವಿಷಯವನ್ನು ಕಲಿಸಲು ನಾವು ಹೊಂದಿದ್ದ ಶಿಕ್ಷಕರು ಉತ್ತಮ ಶಿಕ್ಷಕರಾಗಿದ್ದರು ಆದರೆ ಅಲ್ಲಿಯೂ ಒಬ್ಬರು ಕೆಟ್ಟದಾಗಿ ಇತಿಹಾಸ ಕಲಿಸುತ್ತಿದ್ದ ಶಿಕ್ಷಕರೂ ಇದ್ದರು. ಇದರೊಂದಿಗೆ ಪೂರ್ವಗ್ರಹ ಪೀಡಿತ ಶಿಕ್ಷಕರನ್ನೂ ಹೊಂದಿದ್ದೆವು, ಅವರು ಪಠ್ಯಪುಸ್ತಕವನ್ನು ಹೇಗೆ ಓದುವುದು ಎಂಬುದನ್ನು ಕುರಿತು ಮಾತ್ರ ತಿಳಿದಿದ್ದರು. ವಿಷಯದ ಬಗ್ಗೆ ನಿಜವಾದ ಜ್ಞಾನವಿರಲಿಲ್ಲ, ಅವರಿಗೇ ವಿಷಯದ ಸರಿಯಾದ ಜ್ಞಾನವಿಲ್ಲದ ಕಾರಣ ವಿದ್ಯಾರ್ಥಿಗಳಿಗೆ ಕೇವಲ ಪ್ರಶ್ನೋತ್ತರಗಳನ್ನು ಕಲಿಸುತ್ತಿದ್ದರು ಮತ್ತು ಈ ಶಿಕ್ಷಕರೇ ಈ ವಿಷಯದ (ಚರಿತ್ರೆ) ಕಲಿಕೆಯನ್ನು ಹಾಳುಮಾಡಿದರು. ಶಾಲೆಯು ನನ್ನ ಆಸಕ್ತಿಯನ್ನು ಹಾಳುಮಾಡಿದರೂ, ನಾನು ಹೊರಗೆ ಕೈಗೊಂಡ ವಿವಿಧ ಚಟುವಟಿಕೆಗಳಿಂದಾಗಿ ಈ ವಿಷಯದ ಬಗೆಗಿನ ನನ್ನ ಉತ್ಸಾಹವು ಕಡಮೆಯಾಗಲಿಲ್ಲ.

ಇತಿಹಾಸವನ್ನು ಕುರಿತ ನನ್ನ ಆಸಕ್ತಿಗೆ ಯಾವುದೇ ರೀತಿಯಾಗಿ ಶಾಶ್ವತವಾಗಿ ಹಾನಿ ಉಂಟಾಗುವ ಮೊದಲೇ, ನಾನು 9ನೇ ತರಗತಿಯಲ್ಲಿರುವಾಗಲೇ ಸ್ಥಳೀಯ ಇತಿಹಾಸವನ್ನು ಕಂಡುಹಿಡಿಯುವ ಕಾರ್ಯದಲ್ಲಿ ತೊಡಗಿಕೊಂಡಿದ್ದೆ. ಹೀಗೆ ಅಲ್ಲಿಂದ ಕೂಮ್ ಕಲ್ಚರಲ್ ಮ್ಯಾಪಿಂಗ್‌ಗೆ/ ಸಾಂಸ್ಕೃತಿಕ ನಕ್ಷೆ ಕಾರ್ಯಕ್ರಮದಲ್ಲಿ ನನ್ನ ಭಾಗವಹಿಸುವಿಕೆ ಪ್ರಾರಂಭವಾಯಿತು. ಚೆನ್ನೈನಲ್ಲಿ ಈಗ ಬಹುತೇಕ ಚರಂಡಿಯಂತಾಗಿರುವ ಕೂಮ್ ನದಿಯನ್ನು ಒಂದು ಕಾಲದಲ್ಲಿ ಪವಿತ್ರ ನದಿ ಎಂದು ಪರಿಗಣಿಸಲಾಗಿತ್ತು, ಅದರ ದಡದಲ್ಲಿ ಸಾವಿರ ವರ್ಷಗಳ ಹಿಂದಿನ ಕಾಲದ ದೇವಾಲಯಗಳ ಅವಶೇಷಗಳಿವೆ ಎಂದು ಅನೇಕರಿಗೆ ತಿಳಿದಿದೆಯೇ? ಇಲ್ಲಿಂದ,

ನಾನು ಅಡ್ಯಾರ್ ಕಲ್ಚರಲ್ ಮ್ಯಾಪಿಂಗ್‌ಗೆ/ ಸಾಂಸ್ಕೃತಿಕ ನಕ್ಷೆ ಕಾರ್ಯಕ್ರಮಕ್ಕೆ ತೆರಳಿದೆ. ಈ ಮಧ್ಯೆ, ಮದ್ರಾಸ್ ಲೋಕಲ್ ಹಿಸ್ಟರಿ ಗ್ರೂಪ್ ಎಂಬ ಫೇಸ್‌ಬುಕ್ ಗುಂಪು ಇತಿಹಾಸ ಸಂಬಂಧಿ ಛಾಯಾಚಿತ್ರಗಳು ಮತ್ತು ಆಸಕ್ತಿದಾಯಕ ಮಾಹಿತಿಯೊಂದಿಗೆ ನನ್ನನ್ನು ಮತ್ತಷ್ಟು ಸೆಳೆಯಲು ಪ್ರಾರಂಭಿಸಿತು.

ಅಲ್ಲಿಂದ, ಸ್ಥಳೀಯ ಇತಿಹಾಸದೊಂದಿಗೆ ನನ್ನನ್ನು ನಾನು ಕ್ರಿಯಾಶೀಲವಾಗಿ ತೊಡಗಿಸಿಕೊಳ್ಳುತ್ತಿದ್ದೇನೆ, ನಾನು ನಡಿಗೆಗಳು (ವಾಕ್ಸ್), ಮಾತುಕತೆಗಳು, ಪಾರಂಪರಿಕ ಪ್ರವಾಸಗಳಿಗೆ ಹಾಜರಾಗಿದ್ದೇನೆ, ಒಂದೆರಡು ನಡಿಗೆಗಳನ್ನು ಆಯೋಜಿಸಲು ಸಹ ಸಹಾಯ ಮಾಡಿದ್ದೇನೆ. ಈ ಅನ್ವೇಷಣೆಯನ್ನು ಒಳಗೊಂಡ ಪ್ರವಾಸಗಳಲ್ಲಿ, ನಾವು ಮಾರ್ಗದುದ್ದಕ್ಕೂ ನಡೆದಿದ್ದೇವೆ, ನಾವು ಎಲ್ಲಿ ಅನುಮತಿಯನ್ನು ಕೇಳಬೇಕು ಎಂಬ ವಿಚಾರವನ್ನು ಗುರುತು ಹಾಕಿಕೊಂಡಿದ್ದೇವೆ, ಅದಕ್ಕೆ ಅನುಗುಣವಾಗಿ ಯಾವ ಸ್ಥಳಗಳಿಗೆ ಭೇಟಿ ನೀಡಬೇಕು ಎಂಬುದನ್ನು ಯೋಚಿಸಿ, ಎಲ್ಲರಿಗೂ ಈ ಕುರಿತ ಮಾಹಿತಿಯನ್ನು ತಿಳಿಸಿ, ಮತ್ತು ಅಂತಿಮವಾಗಿ, ಈ ಕಾರ್ಯಕ್ರಮದ ದಿನದಂದು ಜನರನ್ನು ಕರೆದುಕೊಂಡು ಹೋಗಿದ್ದೇವೆ. ಪತ್ರಕರ್ತೆ ಮತ್ತು ಇತಿಹಾಸಕಾರರಾದ ನಿವೇದಿತಾ ಲೂಯಿಸ್ ಅವರೊಂದಿಗೆ ನಾನು ಈ ರೀತಿಯ ಕಾರ್ಯಕ್ರಮವನ್ನು ಎರಡು ಬಾರಿ ಆಯೋಜಿಸಿದ್ದೇನೆ.

ಈ ರೀತಿಯ ಕಾರ್ಯಕ್ರಮವನ್ನು ನಡೆಸುವುದು ಮತ್ತು ಭಾಗವಹಿಸುವುದು, ರಾಷ್ಟ್ರ ಮತ್ತು ಪ್ರಪಂಚದಾದ್ಯಂತ ಅನೇಕ ಘಟನೆಗಳು ನಡೆಯುತ್ತಿರುವಾಗಲೂ, ನನ್ನ ನಗರವಾದ ಐತಿಹಾಸಿಕವಾಗಿ ಪ್ರಾಮುಖ್ಯ ಹೊಂದಿದ ಚೆನ್ನೈನಲ್ಲಿ ಏನು ನಡೆಯುತ್ತಿದೆ ಎಂಬುದರ ಬಗ್ಗೆ ನನಗೆ ಒಂದು ಚಿತ್ರಣವನ್ನು ನೀಡುತ್ತಿತ್ತು. ನಮ್ಮ ಅಜ್ಞಾನದಿಂದ ನಗರದಲ್ಲಿನ ಪರಂಪರೆ ಹೇಗೆ ನಶಿಸಿಹೋಗುತ್ತಿದೆ ಎಂಬುದರ ಬಗ್ಗೆ ಇದು ನನಗೆ ಅರಿವು ಮೂಡಿಸಿತು ಮತ್ತು ಅದನ್ನು ತಡೆಯಲು ಈ ರೀತಿಯಾಗಿ ಅಳಿಲುಸೇವೆ ಮಾಡಲಾಗುತ್ತಿದೆ ಎಂಬುದನ್ನು ನಾನು ತಿಳಿದುಕೊಂಡೆ. ಉದಾಹರಣೆಗೆ, ಷಹಜಹಾನ್‌ನಿಗೆ ಪಟ್ಟಾಭಿಷೇಕ ಮಾಡುವಾಗ, ಮದ್ರಾಸ್ ಪಟ್ಟಣವನ್ನು ಚಂದ್ರಗಿರಿಯ ರಾಜನಿಂದ ಖರೀದಿಸಲಾಯಿತು. ಭಾರತದ ಮೊದಲ ರೈಲುಮಾರ್ಗದ ಬಗ್ಗೆ ಮಾತನಾಡುವಾಗ, ಜನರು ಮುಂಬೈ-ಥಾಣೆ ಮಾರ್ಗದ ಬಗ್ಗೆ ಯೋಚಿಸುತ್ತಾರೆ. ಆದರೆ ಅದಕ್ಕೂ ಮುಂಚೆಯೇ, ಮದ್ರಾಸಿನ ರೆಡ್ ಹಿಲ್ಸ್‌ನಿಂದ ಮರವನ್ನು ಸಾಗಿಸಲು ರೈಲುಮಾರ್ಗವನ್ನು ಬಳಸಲಾಗುತ್ತಿತ್ತು. ರಾಯಪುರಂ ರೈಲು ನಿಲ್ದಾಣವು ದೇಶದಲ್ಲಿ ಇನ್ನೂ ಉಳಿದಿರುವ ಅತ್ಯಂತ ಹಳೆಯ ನಿಲ್ದಾಣವಾಗಿದೆ. ಚೆನ್ನೈನಲ್ಲಿ ಅಸ್ತಿತ್ವದಲ್ಲಿದ್ದ ಭಾರತದ ಮೊದಲ ಹೋಟೆಲ್‌ಗಳಲ್ಲಿ ಒಂದಾಗಿದ್ದ, ಎಲಿವೇಟರ್ ಹೊಂದಿದ್ದ ಹೋಟೆಲ್ ಬಾಟಾ ಶೋರೂಮ್ ಆಗಿ ಪರಿವರ್ತನೆಗೊಂಡಿತು ಮತ್ತು ವಾಣಿಜ್ಯ ಉದ್ದೇಶಗಳಿಗಾಗಿ ಕಳೆದ ವರ್ಷ ಇದನ್ನು ಕೆಡವಲಾಯಿತು.

ಸ್ಥಳೀಯ ಇತಿಹಾಸದ ಹೊರತಾಗಿ, ನನ್ನ ಅಜ್ಜನ ಪುರಾತನ ನಾಣ್ಯಗಳ ಸಂಗ್ರಹಕ್ಕೆ ನಾನು ಧನ್ಯವಾದಗಳನ್ನು ಹೇಳಲೇ ಬೇಕು, ನಿಧಾನವಾಗಿ ನಾನು ಈ ಸಂಗ್ರಹವನ್ನು ಬೆಳೆಸುತ್ತಿದ್ದೇನೆ. ನಾನು ನಾಣ್ಯಶಾಸ್ತ್ರದ ಬಗ್ಗೆ ಕಲಿತಿದ್ದೇನೆ. ನಾಣ್ಯ ಮೇಳಗಳಿಗೆ ಹಾಜರಾಗುವುದು, ಶತಮಾನಗಳಿಂದಲೂ ಮುದ್ರಿಸಲಾಗುತ್ತಿರುವ ವಿವಿಧ ನಾಣ್ಯಗಳನ್ನು ಕುರಿತು ಸಂಶೋಧನೆ ನಡೆಸುವುದು, ಅವುಗಳ ವರ್ಗ ಮತ್ತು ಸಂಬಂಧಿತ ಮೌಲ್ಯಗಳು, ಇವೆಲ್ಲವೂ ಹಿಂದಿನ ಆರ್ಥಿಕತೆಗಳು ಮತ್ತು ಹಿಂದಿನಕಾಲದಲ್ಲಿದ್ದ ಹಣದ ಸಂಕೀರ್ಣತೆಯ ಬಗ್ಗೆ ನನಗೆ ಕಲಿಸಿದವು. ನಾಣ್ಯಗಳು, ಅವುಗಳ ಮೇಲಿನ ಭಾಷೆ ಮತ್ತು ಅವು ಅವುಗಳ ಮೇಲಿನ ಕೆತ್ತನೆಗಳಿಂದ ತಮ್ಮ ಕಾಲವನ್ನು ಹೇಗೆ ಪ್ರತಿನಿಧಿಸುತ್ತವೆ ಎಂಬುದನ್ನು ನಾನು ಕಂಡುಕೊಂಡೆ. ನಾಣ್ಯಗಳು ಒಂದು ಸಾಮ್ರಾಜ್ಯದ ಆರ್ಥಿಕ ಬಲವನ್ನು ಮತ್ತು ನಾಣ್ಯ ಹಾಗೂ ಲೋಹದ ಮೌಲ್ಯಗಳೆರಡರಿಂದಲೂ ಆ ಸಾಮ್ರಾಜ್ಯವು ಎಷ್ಟು ಸಮೃದ್ಧವಾಗಿತ್ತು ಮತ್ತು ಇಂದು ಆ ನಾಣ್ಯದ ಖರೀದಿ ಮೌಲ್ಯ ಎಷ್ಟು ಎಂದು ನಮಗೆ ಹೇಳಬಹುದು.

ಪಾರಂಪರಿಕ ಪ್ರವಾಸಗಳಲ್ಲಿ ನಾನು ಹಳೆಯ ಮತ್ತು ಪುರಾತನ ದೇವಾಲಯಗಳಿಗೆ ಭೇಟಿ ನೀಡಿದಾಗ, ಗೋಡೆಗಳ ಮೇಲೆ ಕೆತ್ತಿದ ಬರವಣಿಗೆಯಲ್ಲಿ ನಾನು ಆಸಕ್ತಿಯನ್ನು ಬೆಳೆಸಿಕೊಂಡಿದ್ದೇನೆ. ಅವರು ಏನು ಹೇಳಿದ್ದಾರೆಂದು ತಿಳಿದುಕೊಳ್ಳುವ ಆಸಕ್ತಿಯಿಂದ ನಾನು ರೀಚ್ ಫೌಂಡೇಶನ್‌ನಲ್ಲಿ ತಮಿಳು ಎಪಿಗ್ರಫಿ ಕೋರ್ಸ್ ಮಾಡಿದೆ. ಹದಿನಾಲ್ಕು ಭಾನುವಾರಗಳು ಮತ್ತು ಪುರಾತನ ದೇವಾಲಯಗಳಿಗೆ ಎರಡು ಪ್ರವಾಸಗಳ ಅನಂತರ, ನಾನು ತಮಿಳು ಬ್ರಾಹ್ಮಿಯಿಂದ ಕ್ರಿಸ್ತ ಪೂರ್ವ 5ನೇ ಶತಮಾನದವರೆಗಿನ

ತಮಿಳು ಶಾಸನಗಳನ್ನು ಓದಲು ಶಕ್ತನಾಗಿದ್ದೇನೆ ಮತ್ತು ಮಡಕೆ ಚೂರುಗಳು ಮತ್ತು ಕಲ್ಲಿನ ಮೇಲೆ, ಪಲ್ಲವ, ಚೋಳ ಮತ್ತು ವಿಜಯನಗರ ಕಾಲದ ತಮಿಳು ಶಾಸನಗಳು ಮತ್ತು ದೇವಾಲಯದ ಗೋಡೆಗಳ ಮೇಲೆ ಸಾಮಾನ್ಯವಾಗಿ 200 ವರ್ಷಗಳ ಹಿಂದೆ ಬರೆಯಲಾದ ಬ್ರಿಟಿಷ್ ಯುಗದ ತಮಿಳು ಶಾಸನಗಳನ್ನು ಓದಬಲ್ಲವನಾದ್ದೇನೆ.

ನನ್ನ ಪ್ರಮುಖ ಆಸಕ್ತಿಯು ಇತಿಹಾಸವಾಗಿದ್ದರೂ, ಓದುವುದು ಸಹ ನನ್ನ ನೆಚ್ಚಿನ ಹವ್ಯಾಸವಾಗಿದೆ. ಈಸ್ಟ್ ಇಂಡಿಯಾ ಕಂಪನಿಯಲ್ಲಿ ಕೆಲಸ ಮಾಡುವವರು 1812 ರಲ್ಲಿ ಸ್ಥಾಪಿಸಿದ 55,000 ಸಾವಿರಕ್ಕೂ ಹೆಚ್ಚು ಪುಸ್ತಕಗಳನ್ನು ಹೊಂದಿರುವ 200 ವರ್ಷಗಳಷ್ಟು ಹಳೆಯದಾದ ಮದ್ರಾಸ್ ಲಿಟರರಿ ಸೊಸೈಟಿಯನ್ನು ನಾನು ಕಂಡುಹಿಡಿದಾಗ ನನಗಾದಾಗ ಸಂತೋಷವನ್ನು ಊಹಿಸಿಕೊಳ್ಳಿ. ಈ ಪುಸ್ತಕಗಳು 400 ವರ್ಷಗಳ ಹಿಂದಿನವು ಮತ್ತು ಈ ಗ್ರಂಥಾಲಯವು ಪಾರಂಪರಿಕ ಕಟ್ಟಡದಲ್ಲಿದೆ. ಮೊದಲು ಇಂಡೆಕ್ಸಿಂಗ್ ಮತ್ತು ಕ್ಯಾಟಲಾಗ್‌ಗೆ ಸಹಾಯ ಮಾಡಲು ಮತ್ತು ಈಗ ಅವರ ಇನ್‌ಸ್ಟಾಗ್ರಾಂ/Instagram ಪುಟಕ್ಕೆ ಚಾಲನೆ ನೀಡಲು ನಾನು ಆಗಾಗ ಅಲ್ಲಿಗೆ ಭೇಟಿ ನೀಡುತ್ತೇನೆ. ಎಂಎಲ್ಎಸ್/MLS ನಲ್ಲಿ ಸ್ವಯಂಸೇವಕತ್ವವು ನನಗೆ ಅದರ ಬಗ್ಗೆ ಕಲಿಸಿದೆ. ಅನೇಕ ವರ್ಷಗಳ ಹಿಂದೆ ಚಲಾವಣೆಯಲ್ಲಿದ್ದ ಸಾಹಿತ್ಯ ಮತ್ತು ನಿಯತಕಾಲಿಕೆಗಳು ಮತ್ತು ವಸಾಹತುಶಾಹಿ ಜೀವನದ ಬಗ್ಗೆ ನನಗೆ ಒಂದು ಇಣುಕು/ಕಿರು ನೋಟ ನೀಡಿವೆ. ಚೆನ್ನೈನ ವಾರ್ಷಿಕ ಸಾಹಿತ್ಯ ಉತ್ಸವವಾದ ಲಿಟ್ ಫಾರ್ ಲೈಫ್‌ನಲ್ಲಿರುವ ಎಂಎಲ್ಎಸ್/MLS ಸ್ಟಾಲ್‌ನಲ್ಲಿ ನಾನು ಸ್ವಯಂಸೇವಕನಾಗಿ ಕಾರ್ಯನಿರ್ವಹಿಸಿದ್ದೇನೆ. ನಾನು ಸಾಮಾನ್ಯವಾಗಿ ಭೇಟಿಯಾಗದ ಲೇಖಕರ ಸಮೂಹದೊಂದಿಗೆ ಮಾತುಕತೆ ನಡೆಸಲು ಇದು ನನಗೆ ಸಹಾಯ ಮಾಡಿದೆ, ಜೊತೆಗೆ ಈ ಈವೆಂಟ್ ಸ್ಟಾಲ್ ಅನ್ನು ಹೇಗೆ ನಿರ್ವಹಿಸುವುದು ಎಂಬುದನ್ನು ನನಗೆ ಕಲಿಸಿದೆ, ಇದು ಜೀವನದಲ್ಲಿ ಅನಂತರದ ದಿನಗಳಲ್ಲಿ ಅಗತ್ಯವಿರುವ ಕೌಶಲ್ಯವಾಗಿದೆ.

ಇದೆಲ್ಲದ್ದಕ್ಕೂ, ನಾನು ಸ್ವಂತವಾಗಿ ವಿವಿಧ ಸ್ಥಳಗಳಿಗೆ ಹೋಗಬೇಕಾಗಿತ್ತು ಮತ್ತು ಇದರಿಂದಾಗಿ, ನನ್ನ ಸ್ಥಳಜ್ಞಾನ ಮತ್ತು ಭೌಗೋಳಿಕ ಪ್ರಜ್ಞೆಯು ತೀಕ್ಷ್ಣವಾಯಿತು. ಏಕೆಂದರೆ ನಾನು ಹೋದಲ್ಲೆಲ್ಲ ಸಾರ್ವಜನಿಕ ಸಾರಿಗೆಯನ್ನು ಬಳಸಲು ಪ್ರಾರಂಭಿಸಿದೆ, ಹೀಗಾಗಿ ನಾನು ಹೋಗಬೇಕಾಗಿರುವ ದಿಕ್ಕುಗಳು ಮತ್ತು ಮಾರ್ಗಗಳನ್ನು ತ್ವರಿತವಾಗಿ ನಿರ್ಧರಿಸಬೇಕಿತ್ತು.

ತರಗತಿಯ ಹೊರಗೆ ನಾನು ಮಾಡಿದ ಹೆಚ್ಚಿನವುಗಳು ಅನೌಪಚಾರಿಕವಾಗಿವೆ (ನನ್ನ ಎಪಿಗ್ರಫಿ ತರಗತಿಗಳನ್ನು ಹೊರತುಪಡಿಸಿ). ಆದಾಗ್ಯೂ, ಎಲ್ಲದರಲ್ಲಿಯೂ ಇರುವ ಸಾಮಾನ್ಯ ವಿಷಯವೆಂದರೆ ಅವೆಲ್ಲವನ್ನೂ ಆಸಕ್ತಿಯಿಂದ ಮಾಡಲಾಗಿದೆ. ಇದೆಲ್ಲದಕ್ಕೂ ನನಗೆ ಸ್ವಯಂ ಪ್ರೇರಣೆಗಳಿತ್ತು. ಸಾರ್ವಜನಿಕ ಸಾರಿಗೆಯಲ್ಲಿ ನನ್ನ ಪ್ರಯಾಣವು ವಿಶೇಷ/ಹೆಚ್ಚಿನದು ಅನಿಸುವುದಿಲ್ಲ, ಆದರೆ ಇದು ನನಗೆ ಸಂವಹನ, ವಿವಿಧ ಟಿಕೆಟ್‌ಗಳ ಬೆಲೆಗಳು, ದೂರಗಳು, ಸಮಯ, ವಸತಿ, ಹೊಂದಾಣಿಕೆ ಮತ್ತು ಸ್ವಾತಂತ್ರ್ಯದ ಪ್ರಜ್ಞೆಯನ್ನು ಕಲಿಸಿದೆ. ತರಗತಿಯು ಕೇವಲ ರಚನಾತ್ಮಕ ವ್ಯವಸ್ಥೆ ಆಗಿದೆ, ಅದು ನಿಮಗೆ ನಿರ್ದಿಷ್ಟ ಸಮಯದೊಳಗೆ ಕಲಿಯಬೇಕಾದ ವಿಷಯಗಳನ್ನು ನೀಡುತ್ತದೆ. ಇಂಟರ್ನ್‌ಶಿಪ್, ಸ್ವಯಂಸೇವಕನಾಗಿ ಕಾರ್ಯ ನಿರ್ವಹಿಸುವುದು, ವೈಯಕ್ತಿಕ ಪ್ರಾಜೆಕ್ಟ್‌ಗಳು- ಇವೆಲ್ಲವೂ ನಿಮಗೆ ಪ್ರಪಂಚದ ವಿಭಿನ್ನ ನೋಟವನ್ನು ನೀಡುತ್ತದೆ. ಒಮ್ಮೆ ನೀವು ತರಗತಿಯಿಂದ ಹೊರಬಂದರೆ ಮತ್ತು ನೀವೇ ಹೊಸತನ್ನು ಅನ್ವೇಷಿಸಲು ಬಯಸಿದರೆ, ಇಲ್ಲಿರುವ ಸಾಧ್ಯತೆಗಳಿಗೆ ಅಂತ್ಯವಿಲ್ಲ.

ನಂದನ್ ಸಂಸ್ಕೃತಿ ಕೌಶಿಕ್ ರವರು ಅಡ್ಯಾರ್‌ನ ಶಿಷ್ಯ ಶಿಕ್ಷಣ ಸಂಸ್ಥೆಯಲ್ಲಿ ಶಿಕ್ಷಣವನ್ನು ಮುಗಿಸಿ, ಈಗಷ್ಟೇ ಹೊರಬಂದ ವಿದ್ಯಾರ್ಥಿ. ಅವರ ಆಸಕ್ತಿಗಳು ಪ್ರವಾಸ, ನಾಣ್ಯಶಾಸ್ತ್ರ, ಬರವಣಿಗೆ ಮತ್ತು ಇತಿಹಾಸವನ್ನು ಒಳಗೊಂಡಿವೆ. ಅಶೋಕ ವಿಶ್ವವಿದ್ಯಾನಿಲಯದಲ್ಲಿ ಪದವಿ ಪೂರ್ವ ವಿದ್ಯಾಭ್ಯಾಸ ಪಡೆಯಲು ಅವರು ದೆಹಲಿಗೆ ತೆರಳುತ್ತಿದ್ದಾರೆ. ಅವರನ್ನು nandansanskriti.k@gmail.com ನಲ್ಲಿ ಸಂಪರ್ಕಿಸಬಹುದು.